

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 04-03-2021 ಪ್ರಶ್ನೆ ಸಂಖ್ಯೆ : 512 (605)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಅ. ದೇವೇಗೌಡ(ಪದವೀಧರರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 04-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಬೆಂಗಳೂರು ಮಹಾನಗರದಲ್ಲಿರುವ ಮೇಲ್ಸೇತುವೆ ನಿರ್ವಹಣೆ ಬಗ್ಗೆ

(ಅ) ಬೃಹತ್ ಬೆಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ನಗರದ ವಿವಿಧ ಭಾಗಗಳಲ್ಲಿ ನಿರ್ಮಾಣವಾಗಿರುವ ಮೇಲ್ಸೇತುವೆ ಹಾಗೂ ಕೆಳ ಸೇತುವೆ ಒಳ ಹಾಗೂ ಹೊರಭಾಗಗಳಲ್ಲಿ ಗಿಡಗಳು ಮರವಾಗಿ ಬೆಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಸೇತುವೆಗಳ ಆಯಸ್ಸು ಕಡಿಮೆ ಆಗುವುದರಿಂದ ಈ ಗಿಡಗಳನ್ನು ತೆಗೆಯಲು ವಹಿಸಲಾದ ಕ್ರಮವೇನು;

(ಆ) ಮೇಲ್ಸೇತುವೆ ಹಾಗೂ ಕೆಳ ಸೇತುವೆಗಳ ರಸ್ತೆಗಳಲ್ಲಿ ಮಳೆ ಬಂದಾಗ/ಕೊಳಚೆ ನೀರು ಸೇರಿದಾಗ ವಾಹನ ಸವಾರರು ಓಡಾಡಲು ತೊಂದರೆ ಆಗುತ್ತಿದ್ದು, ಇವುಗಳನ್ನು ಸ್ವಚ್ಚಗೊಳಿಸಲು ಕೈಗೊಳ್ಳಲಾದ ಕ್ರಮ ಏನು?